RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೯, ೨೦೧೩ (ಭಾದ್ರಪದ ೨೮, ಶಕ ವರ್ಷ ೧೯೩೫)<br>Bangalore, Thursday, September 19, 2013 (Bhadrapada 28, Shaka Varsha 1935) | ಸಂಚಿಕೆ ೩೮<br>Issue 38 |
| --- | --- | --- |

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಸೇರಿದ ಇಂಡಿಯನ್ ಬ್ಯಾಂಕ್ ಮಂಡ್ಯ ಬ್ರಾಂಚ್‌ನಲ್ಲಿಟ್ಟಿದ್ದ ರೂ. 5.00 ಕೋಟಿ ಹಣವನ್ನು ವಂಚಿಸಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಡಾ॥ ಹೆಚ್.ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರು ದಿನಾಂಕ: 16–07–2013ರಿಂದ ನ್ಯಾಯಾಂಗ ಬಂಧನದಲ್ಲಿರುವುದರಿಂದ ಸೇವೆಯಿಂದ ನಿಲಂಬನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1. ಮಂಡ್ಯ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ : ಎಂಯು.ಎಸ್(2) 114/2013–14, ದಿನಾಂಕ : 16–07–2013
2. ಸಮಾಜ ಕಲ್ಯಾಣ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಕಇ 258 ಪಕಸೆ 2013, ದಿನಾಂಕ : 24–07–2013.

**ಪ್ರಸ್ತಾವನೆ :**

ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದಿಂದ ಇಂಡಿಯನ್ ಬ್ಯಾಂಕ್, ಮಂಡ್ಯ ಶಾಖೆಯಲ್ಲಿ ಠೇವಣಿ ಇಟ್ಟಿದ್ದ ಐದು ಕೋಟಿ ರೂಪಾಯಿಗಳ ಹಣವನ್ನು ಬ್ಯಾಂಕ್ ಅಧಿಕಾರಿಗಳು ವಂಚಿಸಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾದ ಡಾ॥ ಹೆಚ್.ಎಸ್. ಶಿವರಾಂ ರವರನ್ನು ಮಂಡ್ಯ ಪಶ್ಚಿಮ ಪೊಲೀಸ್ ಠಾಣೆಯಲ್ಲಿ ದಾಖಲಾದ ಕ್ರೈಂ ನಂ. 2/3/2013 ಐ.ಪಿ.ಸಿ. ಸೆಕ್ಷನ್ 408, 409, 468, 471, 420 ಸಹವಾಚನ ಐ.ಪಿಸಿ. 34ರಡಿ ದಿನಾಂಕ : 15–07–2013 ರಂದು ರಾತ್ರಿ 9.45ರ ವೇಳೆಯಲ್ಲಿ ಬಂಧಿಸಿ, ದಿನಾಂಕ : 16–07–2013 ರಂದು ಮ್ಯಾಜಿಸ್ಟ್ರೇಟ್‌ರ ಮುಂದೆ ಹಾಜರುಪಡಿಸಲಾಗಿದೆ. ಗೌರವಾನ್ವಿತ ನ್ಯಾಯಾಧೀಶರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾದ ಡಾ॥ ಹೆಚ್.ಎಸ್. ಶಿವರಾಂ ರವರನ್ನು ದಿನಾಂಕ : 16–07–2013 ರಿಂದ 20–07–2013 ರವರೆಗೆ ಪೊಲೀಸ್ ಕಸ್ಟಡಿಗೆ ಒಪ್ಪಿಸಿದ್ದು ಪ್ರಸ್ತುತ ಸದರಿ ಅವರು ನ್ಯಾಯಾಂಗ ಬಂಧನದಲ್ಲಿರುತ್ತಾರೆಂದು ಮೇಲೆ 1 ರಲ್ಲಿ ಓದಲಾದ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಡಾ॥ ಹೆಚ್.ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರು ದಿನಾಂಕ : 16–07–2013 ರಿಂದ ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಬಂಧನದಲ್ಲಿರುವುದು ದೃಢಪಟ್ಟಿರುವುದರಿಂದ, 1957 ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಾವಳಿಗಳು ನಿಯಮ 10(2)(ಎ) ಅಡಿಯಲ್ಲಿ ಅವರು ಬಂಧನಕ್ಕೊಳಗಾದ ಅವಧಿಯು 48 ಗಂಟೆಗಳಿಗೂ ಹೆಚ್ಚಾಗಿರುವುದರಿಂದ ನಿಲಂಭನೆಯಲ್ಲಿದ್ದರೆಂದು (Deemed Suspension) ಪರಿಗಣಿಸಬೇಕಾಗುತ್ತದೆ. ಡಾ॥ ಹೆಚ್.ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರು ನಗರಾಭಿವೃದ್ಧಿ ಇಲಾಖೆಯಲ್ಲಿ ನಿಯೋಜನೆಯ ಮೇಲೆ ಕಾರ್ಯನಿರ್ವಹಿಸುತ್ತಿರುವುದರಿಂದ ಇವರನ್ನು ಸೇವೆಯಿಂದ ನಿಲಂಭನೆಗೊಳಿಸಲು 1957 ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಗಳು 15(1)ರಡಿಯಲ್ಲಿನ ಉಪಬಂಧದಂತೆ ಸಮಾಜ ಕಲ್ಯಾಣ ಇಲಾಖೆಯ ಸಹಮತಿಯನ್ನು ಮೇಲೆ 2 ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯ ಮೂಲಕ ಪಡೆಯಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ನಅಇ 320 ಮೈಅಪ್ರಾ 2013, ಬೆಂಗಳೂರು, ದಿನಾಂಕ : 25–07–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(2)(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ॥ ಹೆಚ್.ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರ ವಿರುದ್ಧ ಶಿಸ್ತು ಕ್ರಮ ಹಾಗೂ ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ದಿನಾಂಕ : 16–07–2013 ರಿಂದಲೇ ಪೂರ್ವಾನ್ವಯವಾಗಿ ಅನ್ವಯಿಸುವಂತೆ ನಿಲಂಭನೆಯಲ್ಲಿಟ್ಟು ಆದೇಶಿಸಿದೆ.

ಡಾ॥ ಹೆಚ್.ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಹಾಗೂ ಸದರಿಯವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 813**
**SC-50**

**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ಎನ್. ಚಿದಾನಂದ, ಆಯುಕ್ತರು ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರ ಇವರನ್ನು ಅಮಾನತ್ತಿನಲ್ಲಿರಿಸುವ ಬಗ್ಗೆ.

**ಓದಲಾಗಿದೆ :**
1. ರಾಮನಗರ ಜಿಲ್ಲಾಧಿಕಾರಿಗಳ ಅ.ಸ. ಪತ್ರ ಸಂಖ್ಯೆ : ಎಂ.ಎ.ಜಿ(1)ಸಿಆರ್/43/2013–14, ದಿನಾಂಕ : 16–07–2013
2. ಕೃಷಿ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಕೃಇ 45 ಕೃಪವಿ 2013, ದಿನಾಂಕ : 25–07–2013.

**ಪ್ರಸ್ತಾವನೆ :**

ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರದಿಂದ ಇಂಡಿಯನ್ ಬ್ಯಾಂಕ್, ಮಂಡ್ಯ ಶಾಖೆಯಲ್ಲ ಠೇವಣಿ ಇಟ್ಟಿದ್ದ 9,90 ಕೋಟಿ ರೂಪಾಯಿಗಳ ಹಣವನ್ನು ಬ್ಯಾಂಕ್ ಅಧಿಕಾರಿಗಳು ವಂಚಿಸಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾದ ಶ್ರೀ ಎನ್. ಚಿದಾನಂದ ಇವರನ್ನು ರಾಮನಗರ ಐಜೂರು ಪೊಲೀಸ್ ಠಾಣೆಯಲ್ಲಿ ದಾಖಲಾದ ಕ್ರೈಂ ನಂ. 123/2013ರಲ್ಲಿ ಐ.ಪಿ.ಸಿ., ಸೆಕ್ಷನ್ 409, 420, 468, 471, ರೆ/ವಿ ಐ.ಪಿ.ಸಿ., 34ರಡಿ ದಿನಾಂಕ : 18–07–2013ರಂದು ಮಧ್ಯಾಹ್ನ 1.30ರ ವೇಳೆಯಲ್ಲಿ ದಸ್ತಗಿರಿ ಮಾಡಿ ದಿನಾಂಕ: 19–07–2013ರಂದು ಮಾನ್ಯ ಸಿ.ಜೆ.ಎಂ. ರಾಮನಗರ ನ್ಯಾಯಾಲಯಕ್ಕೆ ಹಾಜರುಪಡಿಸಲಾಗಿದೆ. ಗೌರವಾನ್ವಿತ ನ್ಯಾಯಾಧೀಶರು, ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾದ ಶ್ರೀ ಎನ್. ಚಿದಾನಂದರವರನ್ನು ದಿನಾಂಕ : 26–07–2013ರ ವರೆಗೆ ಪೊಲೀಸ್ ಬಂಧನದಲ್ಲಿ ಒಪ್ಪಿಸಿದ್ದು ಪ್ರಸ್ತುತ ಅವರು ನ್ಯಾಯಾಂಗ ಬಂಧನದಲ್ಲಿರುತ್ತಾರೆಂದು ಮೇಲೆ 1 ರಲ್ಲಿ ಓದಲಾದ ಪತ್ರದಲ್ಲಿ ಹಾಗೂ ಪೊಲೀಸ್ ಉಪ ಅಧೀಕ್ಷಕರ ಕಛೇರಿಯ ಫ್ಯಾಕ್ಸ್ ಪತ್ರ ದಿನಾಂಕ : 20–07–2013ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಶ್ರೀ ಎನ್. ಚಿದಾನಂದ, ಉಪ ನಿರ್ದೇಶಕರು, ಕೃಷಿ ಇಲಾಖೆ ಹಾಲಿ ನಿಯೋಜನೆ ಮೇಲೆ ಆಯುಕ್ತರು, ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರ ಇವರು ದಿನಾಂಕ : 19–07–2013 ರಿಂದ ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಬಂಧನದಲ್ಲಿರುವುದು ದೃಢಪಟ್ಟಿರುವುದರಿಂದ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಾವಳಿಗಳು ನಿಯಮ 10(2)(ಎ) ಅಡಿಯಲ್ಲಿ ಅವರು ಬಂಧನಕ್ಕೊಳಗಾದ ಅವಧಿಯು 48 ಗಂಟೆಗಳಿಗೂ ಹೆಚ್ಚಾಗಿರುವುದರಿಂದ ನಿಲಂಭನೆಯಲ್ಲಿದ್ದರೆಂದು (Deemed Suspension) ಪರಿಗಣಿಸಬೇಕಾಗುತ್ತದೆ. ಶ್ರೀ ಎನ್. ಚಿದಾನಂದ, ಉಪ ನಿರ್ದೇಶಕರು, ಕೃಷಿ ಇಲಾಖೆ ಹಾಲಿ ನಿಯೋಜನೆ ಮೇಲೆ ಆಯುಕ್ತರು, ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರ ಇವರು ನಗರಾಭಿವೃದ್ಧಿ ಇಲಾಖೆಯಲ್ಲಿ ನಿಯೋಜನೆಯ ಮೇಲೆ ಕಾರ್ಯನಿರ್ವಹಿಸುತ್ತಿರುವುದರಿಂದ ಇವರನ್ನು ಸೇವೆಯಿಂದ ನಿಲಂಭನೆಗೊಳಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಗಳು 15(1)ರಡಿಯಲ್ಲಿನ ಉಪಬಂಧದಂತೆ ಕೃಷಿ ಇಲಾಖೆಯ ಸಹಮತಿಯನ್ನು ಮೇಲೆ 2 ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯ ಮೂಲಕ ಪಡೆಯಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ನಅಇ 146 ಬೆಂರೂಪ್ರಾ 2013, ಬೆಂಗಳೂರು, ದಿನಾಂಕ : 29–07–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(2)(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎನ್. ಚಿದಾನಂದ, ಉಪನಿರ್ದೇಶಕರು, ಕೃಷಿ ಇಲಾಖೆ ಹಾಲಿ ನಿಯೋಜನೆ ಮೇಲೆ ಆಯುಕ್ತರು, ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರ ಇವರ ವಿರುದ್ಧ ಶಿಸ್ತು ಕ್ರಮ ಹಾಗೂ ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ದಿನಾಂಕ : 19–07–2013 ರಿಂದಲೇ ಪೂರ್ವಾನ್ವಯವಾಗಿ ಅನ್ವಯಿಸುವಂತೆ ನಿಲಂಭನೆಯಲ್ಲಿಟ್ಟು ಆದೇಶಿಸಿದೆ.

ಶ್ರೀ ಎನ್. ಚಿದಾನಂದ, ಉಪನಿರ್ದೇಶಕರು, ಕೃಷಿ ಇಲಾಖೆ ಹಾಲಿ ನಿಯೋಜನೆ ಮೇಲೆ ಆಯುಕ್ತರು, ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರ ಇವರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಹಾಗೂ ಸದರಿಯವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 814**
**SC-50**

**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ವಿಜಾಪೂರ ನ್ಯಾಯಾಲಯ ಆವರಣದಲ್ಲಿ ಡ್ಯೂಪ್ಲೆಕ್ಸ್ ಕೋರ್ಟ್ ಕಾಂಪ್ಲೆಕ್ಸ್ ಕಟ್ಟಡದ ನಿರ್ಮಾಣ ಕಾಮಗಾರಿಯ ಅಂದಾಜು ಮೊತ್ತ ರೂ. 780.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಕ(ಉ) ಧಾರವಾಡ, ಇವರ ಪತ್ರ ಸಂ : ಮಇಂಉ:ತಾಸ–5:ಸಇಂ–1: ಕೋರ್ಟ್: 2012–13, ದಿನಾಂಕ : 04–12–2012.

**ಪ್ರಸ್ತಾವನೆ :**

ವಿಜಾಪೂರ ನ್ಯಾಯಾಲಯ ಆವರಣದಲ್ಲಿ ಡ್ಯೂಪ್ಲೆಕ್ಸ್ ಕೋರ್ಟ್ ಕಾಂಪ್ಲೆಕ್ಸ್ ಕಟ್ಟಡದ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಯ ರೂ. 780.00 ಲಕ್ಷಗಳ ಮೊತ್ತಕ್ಕೆ 2012–13ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್–ಇ ನಲ್ಲಿ ಲೆಕ್ಕಶೀರ್ಷಿಕೆ : 4059–80–051–0–32–386ರ ನ್ಯಾಯಾಲಯ ಕಟ್ಟಡಗಳಡಿಯಲ್ಲಿ ಸೇರ್ಪಡೆಯಾಗಿರುತ್ತದೆ. ಸದರಿ ಕಟ್ಟಡದ ಕಾಮಗಾರಿಯ ಅಂದಾಜು ಪಟ್ಟಿಯಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲು ಅವಕಾಶ ಕಲ್ಪಿಸಲಾಗಿದೆ.

| Sl. No. | Description of Work | Amount |
|---|---|---|
| 1. | Ground Floor (Civil Portion) | 70671722.81 |
| 2. | First Floor (Pent House) | 1159852.33 |
| 3. | Water Supply & Sanitation | 853428.00 |
| 4. | Electrification | 4450000.00 |
| 5. | For Fixtures L/S | 100000.00 |
| 6. | Provision of Architectural features like cornice ornamental columns etc. L/S | 200000.00 |
| | **Total** | **77435003.14** |
| 7. | MIS, Tender Premium & | 564996.86 |
| | **Total Amount Rs.** | **78000000.00** |

2.ವಿಜಾಪೂರ ನ್ಯಾಯಾಲಯ ಆವರಣದಲ್ಲಿ ಡ್ಯೂಪ್ಲೆಕ್ಸ್ ಕೋರ್ಟ್ ಕಾಂಪ್ಲೆಕ್ಸ್ ಕಟ್ಟಡದ ನಿರ್ಮಾಣ ಕಾಮಗಾರಿಯ ಅಂದಾಜು ಮೊತ್ತ ರೂ. 780.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

3. ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 4 ಬಿಜೆಪಿ 2013, ಬೆಂಗಳೂರು, ದಿನಾಂಕ : 20–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ವಿಜಾಪೂರ ನ್ಯಾಯಾಲಯ ಆವರಣದಲ್ಲಿ ಡ್ಯೂಪ್ಲೆಕ್ಸ್ ಕೋರ್ಟ್ ಕಾಂಪ್ಲೆಕ್ಸ್ ಕಟ್ಟಡದ ನಿರ್ಮಾಣ ಕಾಮಗಾರಿಗೆ ಅಪೆಂಡಿಕ್ಸ್–ಇ ನಲ್ಲಿ 'ಲೆಕ್ಕಶೀರ್ಷಿಕೆ : 4059–80–051–0–32–386ರ ನ್ಯಾಯಾಲಯ ಕಟ್ಟಡಗಳಡಿಯಲ್ಲಿ ತಯಾರಿಸಿರುವ ಅಂದಾಜು ಪಟ್ಟಿಯ ಮೊತ್ತ ರೂ. 780.00 ಲಕ್ಷ (ರೂಪಾಯಿ ಏಳುನೂರ ಎಂಬತ್ತು ಲಕ್ಷಗಳು ಮಾತ್ರ) ಗಳ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

**P.R. 815**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕು ಮಳವಳ್ಳಿ ಪಟ್ಟಣದಲ್ಲಿ ನ್ಯಾಯಾಲಯ ಸಂಕೀರ್ಣ ಕಟ್ಟಡ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ರೂ. 1265.00 ಲಕ್ಷಗಳ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಕ(ದ) ಬೆಂಗಳೂರು ಇವರ ಪತ್ರ ಸಂ : ಮುಅ: ಸಂಕದ:ಸಇ–3:2012–13, ದಿನಾಂಕ : 17–12–2012.

**ಪ್ರಸ್ತಾವನೆ :**

ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕು ಮಳವಳ್ಳಿ ಪಟ್ಟಣದಲ್ಲಿ ನ್ಯಾಯಾಲಯ ಸಂಕೀರ್ಣ ಕಟ್ಟಡ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಯ ರೂ. 1265.00 ಲಕ್ಷಗಳ ಮೊತ್ತಕ್ಕೆ 2012–13ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್–ಇ ನಲ್ಲಿ ಲೆಕ್ಕಶೀರ್ಷಿಕೆ : 4059 ಯೋಜನೆ ಅಡಿಯಲ್ಲಿ ಅನುದಾನ ರೂ. 450.00 ಲಕ್ಷಗಳೊಂದಿಗೆ ಸೇರ್ಪಡೆಯಾಗಿರುತ್ತದೆ. ಸದರಿ ಕಟ್ಟಡದ ಕಾಮಗಾರಿಯ ಅಂದಾಜು ಪಟ್ಟಿಯಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲು ಅವಕಾಶ ಕಲ್ಪಿಸಲಾಗಿದೆ.

ನೆಲಮಹಡಿ, ಮೊದಲನೇ ಮಹಡಿ, ಎರಡನೇ ಮಹಡಿ, ಮೂರನೆ ಮಹಡಿಗಳನ್ನು ನಿರ್ಮಿಸಲು ಅವಕಾಶ ಮಾಡಿಕೊಳ್ಳಲಾಗಿದೆ.

1. ವಿದ್ಯುತ್ಶಕ್ತಿ, ನೀರು ಪೂರೈಕೆ ಮತ್ತು ನೈರ್ಮಲೀಕರಣ, ಕಾಮಗಾರಿ ಒಳಗೊಂಡಿರುತ್ತದೆ.

2. ರೆಕಾರ್ಡ್‌ರೂಂ, ಕ್ಯಾಂಟೀನ್ ಬಿಲ್ಡಿಂಗ್, ಸೆಕ್ಯೂರಿಟಿ ಗಾರ್ಡ್ ರೂಂಗಳನ್ನು ನಿರ್ಮಿಸಲು ಅವಕಾಶ ಮಾಡಿಕೊಳ್ಳಲಾಗಿದೆ.
3. ಅಪ್ರೋಚ್ ರಸ್ತೆ ಮತ್ತು ಕಂಪೌಂಡ್ ಗೋಡೆ ನಿರ್ಮಿಸಲು ಅವಕಾಶ ಮಾಡಿಕೊಳ್ಳಲಾಗಿದೆ.

ಸದರಿ ಕಟ್ಟಡದ ಕಾಮಗಾರಿಯ ಅಂದಾಜು ಮೊತ್ತ ರೂ. 1265.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 5 ಬಿಜೆಪಿ 2013, ಬೆಂಗಳೂರು, ದಿನಾಂಕ : 20-06-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕು ಮಳವಳ್ಳಿ ಪಟ್ಟಣದಲ್ಲಿ ನ್ಯಾಯಾಲಯ ಸಂಕೀರ್ಣ ಕಟ್ಟಡ ನಿರ್ಮಾಣ ಕಾಮಗಾರಿಗೆ ಲೆಕ್ಕಶೀರ್ಷಿಕೆ : 4059 ಯೋಜನೆ ಅಡಿಯಲ್ಲಿ ಅಂದಾಜು ಪಟ್ಟಿಯ ಮೊತ್ತ ರೂ. 1265.00 ಲಕ್ಷ (ರೂಪಾಯಿ ಒಂದು ಸಾವಿರದ ಇನ್ನೂರ ಅರವತ್ತೈದು ಲಕ್ಷಗಳು ಮಾತ್ರ) ಗಳ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

**P.R. 816**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಲೋಕೋಪಯೋಗಿ ಇಲಾಖೆಯ ಸರ್ಕಾರಿ ಅಧಿಕೃತ ಕೆಲಸಗಳಿಗಾಗಿ ವಾಹನಗಳನ್ನು ಉಪಯೋಗಿಸಲು ಇಂಧನ ಹಾಗೂ ಚಲಿಸುವ ದೂರದ ಮಿತಿಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಕ(ದ) ಬೆಂಗಳೂರು ಇವರ ಪತ್ರ ಸಂ : ಮುಇಂ/ಸಂಕದ/ಮೇಫ/ಸಇಂ-1/ಹೆಚ್ಚಿನ ಇಂಧನ/2012-13, ದಿನಾಂಕ : 09-01-2013.

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಲೋಇ 68 ಸ್ವೀಮರ 98, ದಿನಾಂಕ : 03/11/1998ರಲ್ಲಿ ಕೇಂದ್ರ ಕಛೇರಿ ಹಾಗೂ ತಮ್ಮ ಕಛೇರಿಯ ಅಧೀನದಲ್ಲಿ ಬರುವ ಕಛೇರಿಗಳ ಅಧಿಕಾರಿಗಳಿಗೆ ಇಂಧನ ಹಾಗೂ ಚಲಿಸುವ ದೂರದ ಮಿತಿಯನ್ನು ನಿಗದಿಪಡಿಸಲಾಗಿದೆ. ಆದರೆ ಅಧೀಕ್ಷಕ ಅಭಿಯಂತರರು, ಮಂಗಳೂರು ವೃತ್ತ, ಮಂಗಳೂರು, ಇವರು ತಮ್ಮ ಅಧೀನದಲ್ಲಿ ಬರುವ ಮೂರು ವಿಭಾಗಗಳ ಕಾರ್ಯ ವ್ಯಾಪ್ತಿಯ ವಿವರಗಳನ್ನು ಸಲ್ಲಿಸಿರುತ್ತಾರೆ. ಸದರಿ ವಿವರಗಳಲ್ಲಿ ಪ್ರತಿ ವಿಭಾಗ ಮಟ್ಟದಲ್ಲಿ ಲೋಕೋಪಯೋಗಿ ಇಲಾಖೆಯ ಕಾಮಗಾರಿಗಳು ಜಾಸ್ತಿಯಾಗಿರುತ್ತವೆ. ಅಲ್ಲದೇ ವಿಭಾಗ ಮಟ್ಟದ ಅಧಿಕಾರಿಗಳು ತಮ್ಮ ದೈನಂದಿನ ಕೆಲಸದ ಜೊತೆ ಕೇಂದ್ರ ಕಛೇರಿ, ವೃತ್ತ ಕಛೇರಿ ಮತ್ತು ಇಲಾಖೆಯ ಸಚಿವರ ಕಛೇರಿ, ಜಿಲ್ಲಾ ಉಸ್ತುವಾರಿ ಕಛೇರಿ ಹಾಗೂ ಇತರೆ ಕೆಲಸ ಕಾರ್ಯಗಳಿಗೆ ಹಾಜರಾಗಬೇಕಾಗುತ್ತದೆ. ಆದಕಾರಣ, ಪ್ರಸ್ತುತ ನಿಗದಿಪಡಿಸಿರುವ ಮಿತಿಯನ್ನು ಹೆಚ್ಚಿಸಲು ಕೋರಿರುತ್ತಾರೆ.

ಲೋಕೋಪಯೋಗಿ ಇಲಾಖಾ ವ್ಯಾಪ್ತಿಯಲ್ಲಿ ವಿವಿಧ ಯೋಜನೆಗಳಲ್ಲಿ ರಸ್ತೆ/ಕಟ್ಟಡಗಳು ಹಾಗೂ ಇತರೆ ಕಾಮಗಾರಿಗಳ ಅನುಷ್ಠಾನ ಇತ್ತೀಚಿನ ದಿನಗಳಲ್ಲಿ ಜಾಸ್ತಿಯಾಗಿರುತ್ತದೆ. ಕಾಮಗಾರಿಗಳ ಉಸ್ತುವಾರಿ ಹಾಗೂ ಪರಿವೀಕ್ಷಣೆ ಮಾಡಲು ಲೋಕೋಪಯೋಗಿ ಇಲಾಖೆಯ ವಿವಿಧ ಹಂತದ ಎಲ್ಲಾ ಅಧಿಕಾರಿಗಳಿಗೆ ಈಗಾಗಲೇ ನಿಗದಿಪಡಿಸಿರುವ ಮಿತಿಯನ್ನು ಹೆಚ್ಚಿಸುವ ಅವಶ್ಯಕತೆಯನ್ನು ಸರ್ಕಾರವು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 149 ಬಿಎಂಎಸ್ 2013, ಬೆಂಗಳೂರು, ದಿನಾಂಕ : 12-07-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಯ ವಿವಿಧ ಹಂತದ ಎಲ್ಲಾ ಅಧಿಕಾರಿಗಳಿಗೆ ಕಛೇರಿ ಕೆಲಸಕ್ಕಾಗಿ ವಾಹನಗಳನ್ನು ಉಪಯೋಗಿಸಲು ಇಂಧನ ಹಾಗೂ ಚಲಿಸುವ ದೂರದ ಮಿತಿಯನ್ನು ಈ ಕೆಳಕಂಡಂತೆ ಹೆಚ್ಚಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ಪದನಾಮ | ಮಿತಿಗೊಳಿಸಿದ ಇಂಧನ | | ಮಿತಿಗೊಳಿಸಿದ ದೂರ ಕಿ.ಮೀ.ಗಳಲ್ಲಿ |
|---|---|---|---|---|
| | | ಡೀಸೆಲ್ (ಲೀ. ಗಳಲ್ಲಿ) | ಪೆಟ್ರೋಲ್ (ಲೀ. ಗಳಲ್ಲಿ) | |
| 01 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 250 | 300 | 2500 |
| 02 | ಕಾರ್ಯಪಾಲಕ ಇಂಜಿನಿಯರ್ | 300 | 350 | 3000 |
| 03 | ಅಧೀಕ್ಷಕ ಅಭಿಯಂತರರು | 300 | 400 | 4000 |
| 04 | ಮುಖ್ಯ ಇಂಜಿನಿಯರ್ | 400 | 500 | 5500 |

ಮೇಲ್ಕಾಣಿಸಿದ ಮಿತಿಗಳಲ್ಲಿ ಯಾವುದು ಕಡಿಮೆಯಾಗುವುದೋ ಸದರಿ ಮಿತಿಯನ್ನು ಅಳವಡಿಸಿಕೊಳ್ಳುವ ಷರತ್ತಿಗೊಳಪಟ್ಟು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

**P.R. 817**

## ENERGY SECRETARIAT

**Sub :** Constitution of State Level Monitoring Committee (SLMC) for financial restructuring of State Distribution Companies of Karnataka-reg.

**Read :**

1. Government of India, Ministry of Power O.M.No. 20/11/2012-APDRP dated 5th October 2012
2. Government of India, Ministry of Power Letter No. 20/11/2012-APDRP dated 8th October 2012
3. Government of India, Ministry of Power D.O. letter No. 20/11/2012-APDRP dated 14th November 2012
4. Government of India, Ministry of Power, Department of Financial Services letter No. F. 17/1/2012/ IF-1, dated 26th December 2012
5. Government of India, Ministry of Power, Department of Financial Services letter No. F. 17/1/2012/I F-1, dated 27th December 2012
6. KERC Letter No. KERC/12/2-114 dated 28th December 2012 communicating "in principal approval" for the financial restructuring plan
7. Government of India, Ministry of Power, letter No. 20/11(6)/2012-APDRP dated 16th April 2013 extending the time limit of finalisation of FRP up to 31st July 2013
8. Approval of the Hon'ble Chief Minister of Karnataka in file No. EN 76 PSR 2012/P3, dated 17-06-2013

**PREAMBLE:**

1. Government of India, Ministry of Power has approved the Financial Restructuring Plan for State Distribution Companies in order to facilitate the financial turn around and to ensure long term financial viability of the State Distribution Companies.
2. The scheme provides support to all participating State Owned Discoms having accumulated losses and facing difficulty in financing operational losses.
3. As per the scheme, 50% of the outstanding short-term liabilities as on 31st March 2012 are to be taken over by the State Government and balance 50% of the short term liabilities will be rescheduled and serviced by the Discoms backed by State Government Guarantee with a moratorium of 3 years on principal and the restructuring will be restricted to short term liabilities of Discoms.
4. Department of Financial Services, Government of India, Ministry of Finance has designated Canara Bank as a Nodal Bank for Karnataka to coordinate the restructuring exercise between Discoms, lenders and State Government.
5. The salient features of the Scheme for restructuring are detailed in Annexure-1.
6. The Operational Framework Document is detailed in Annexure-II
7. In order to monitor the progress of the turnaround plan, two Committees at State and Central levels along with third party verification needs to be constituted as contained in the said letter.
8. Accordingly, it is proposed to constitute a State Level Monitoring Committee (SLMC) to review the progress every quarter and report to the Central Level Monitoring Committee (CLMC).

Hence, this Order,

### GOVERNMENT ORDER NO. EN 76 PSR 2012/P3, BANGALORE DATED: 6th JULY 2013

1. Government is pleased to accord approval to constitute the State Level Monitoring Committee (SLMC) with the following Members for finalising the Financial Restructuring of State Distribution Companies of Karnataka.

| | | | |
|---|---|---|---|
| 1) | Chief Secretary to Government | … | Chairperson |
| 2) | Additional Chief Secretary to Government Finance Department | … | Member |
| 3) | Additional Chief Secretary/Principal Secretary to Govt. Energy Department | … | Member Secretary |
| 4) | Managing Director, BESCOM | … | Member |
| 5) | Managing Director, MESCOM | … | Member |
| 6) | Managing Director, HESCOM | … | Member |
| 7) | Managing Director, GESCOM | … | Member |

| | | | |
|---|---|---|---|
| 8) | Managing Director, CESC | … | Member |
| 9) | Sri S.A. Kadur, General Manager, Canara Bank | … | Member & Nodal Bank |
| 10) | Sri K.Preetham Lal, General Manager, Syndicate Bank | … | Member |
| 11) | Sri Sidhartha Ray, Deputy General Manager, S.B.I | … | Member |
| 12) | Sri M.P. Singh, Director, Central Electricity Authority | … | Member |

2. The Committee would review the progress on quarterly basis till the turnaround of the State DISCOMS and will submit its reports to the Central Level Monitoring Committee (CLMC) and subsequently the SLMC will meet once every half year.

3. The detailed Scheme for Turnaround of State Discoms and the Operational Framework Document are annexed as Annexure-I & Annexure-II respectively which read as part of this Order.

By Order and in the name of the Governor of Karnataka,

**A.A. CHAPPARBAND**

Under Secretary to Government,

**P.R. 770** Energy Department.

## ಇಂಧನ ಸಚಿವಾಲಯ

**ವಿಷಯ:** 2013–14ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2013 ದಿನಾಂಕ: 10–05–2013.
2. ಸರ್ಕಾರಿ ಆದೇಶ ಸಂಖ್ಯೆ ಇಎನ್ 15 ಪಿಎಸ್‌ಆರ್ 2013 ದಿನಾಂಕ: 24–05–2013.
3. ಕವಿನಿನಿ ಪತ್ರ ಸಂಖ್ಯೆ ಎ1 ಎಫ್3 ಬಿ2 /7 ದಿನಾಂಕ: 06–06–2013.
4. ಕವಿಪ್ರನಿನಿ ಪತ್ರ ಸಂಖ್ಯೆ ಕೆಪಿಟಿಸಿಎಲ್/ಎಫ್ಎ(ಎ&ಆರ್)/ಕೆಸಿಓ–30/14398/2009–10 ದಿನಾಂಕ:10–06–2013.

**ಪ್ರಸ್ತಾವನೆ :**

1) 2013-14ನೇ ವರ್ಷದ ಆಯವ್ಯಯ ಸವಿವರ ವೆಚ್ಚದ ಅಂದಾಜಿನಲ್ಲಿ ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಗೆ ಲೆಕ್ಕ ಶೀರ್ಷಿಕೆ 4801–01–190–0–09–211 Investment in Power Utility ಯಡಿ ರೂ.700 ಕೋಟಿಗಳನ್ನು ಒದಗಿಸಲಾಗಿದೆ.

2) ಮೇಲಿನ ಕ್ರಮ ಸಂಖ್ಯೆ 3 ಮತ್ತು 4 ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಬಂಡವಾಳ ಕಾಮಗಾರಿಗಳನ್ನು ಮುಂದುವರೆಸಲು ಬಂಡವಾಳ ಹೂಡಲು ಕೋರಿರುತ್ತಾರೆ.

3) ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲೂ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (Equity) ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್15 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ: 28–06–2013**

1) 2013-14ನೇ ಸಾಲಿಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ.100.00 ಕೋಟಿ (ರೂ.ನೂರು ಕೋಟಿಗಳು ಮಾತ್ರ) ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ರೂ.75 ಕೋಟಿಗಳನ್ನು (ರೂ.ಎಪ್ಪತ್ತೈದು ಕೋಟಿಗಳು ಮಾತ್ರ) ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801–01–190–0–09–211 Investment in Power Utilities (ಯೋಜನೆ) " ಯಡಿ ಬಿಡುಗಡೆ ಮಾಡಿ ಆದೇಶಿಸಿದೆ.

2) ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (Payee`s receipts)ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3) ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity)ವಾಗಿ ಬಳಸಿಕೊಂಡು, ಈ ಬಗ್ಗೆ ದೃಡೀಕರಣ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.

4) ಮೇಲಿನ ಕ್ರಮಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಟ್ರಜರಿಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿದೆ.

5) ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

6) ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ ಇಎನ್ 15 ಪಿಎಸ್ಆರ್ 2013 ದಿನಾಂಕ: 24–05–2013ರಲ್ಲಿ ನೀಡಿದೆ.

7) ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 01 TFP 2013 ದಿನಾಂಕ: 10-05-2013 ರಲ್ಲಿ ಇಲಾಖಾ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಎ.ಎ.ಚಪ್ಪರಬಂದ್,
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 771**

## ENERGY SECRETARIAT

**Sub :** Reallocation of subsidy released to ESCOMs during 2012-13.

**Read :**

1. Govt order No: EN 14 PSR 2012 dated 23-04-2012, 09-05-2012, 05-06-2012, 25-06-2012, 03-07-2012, 23-07-2012, 06-08-2012, 31-08-2012, 06-09-2012, 04-10-2012, 08-10-2012, 02-11-2012, 15-11-2012 14-12-2012, 11-01-2013, 23-01-2013, 23-02-1013, 01-03-2013, 07-03-2013, 23-03-2013, 30-03-2013 and 30-03-2013 (Reallocation Order).
2. HESCOM D.O. Ltr No. HESCOM/MD/FA/DCA (B&R)/4512/13-14 dated: 14-06-2013.
3. BESCOM D.O. Ltr No BESCOM/M/DF/GM(PP)/BC-39/2013-14/45-47 dated: 19-06-2013.

**PREAMBLE:**

1. KERC has been approving subsidy and truing up subsidy to ESCOMs. The State Government has been releasing subsidy and arrears of subsidy to the ESCOMs towards free power supply to IP sets & BJ/KJ installations as approved by KERC.
2. During 2007-08 to 2010-11 there was additional subsidy approved by KERC and short release of subsidy against the subsidy approved by KERC.
3. The KERC has approved subsidy of Rs 1905.79 Crs and there was balance of truing up subsidy of |Rs 829.78Crs.
4. The State Govt has released Rs 1905.79 Crs of Subsidy for 2012-13 and also balance of truing up subsidy of Rs 829.78 Crs during 2012-13. The State Govt has released Rs.2735.57 Crs. The State Govt has released Rs 1514.68 Crs out of subsidy of 2735.57 Crs. directly to KPCL towards power purchase cost of HESCOM.
5. The HESCOM has observed that there was excess release of power purchase cost payable by HESCOM to KPCL for the year 2102-13 and stated that the releasing of huge amount of subsidy to KPCL in one year for the past dues has resulted in liquidity problem to HESCOM and is not in a position to discharge other legitimate payment obligations of 2012-13.
6. HESCOM has requested for adjusting excess subsidy released over 2012-13 power purchase cost payable to KPCL towards medium & short term power purchase cost paid by other ESCOMs on behalf of HESCOM.
7. BESCOM has also requested to adjust the excess subsidy released over 2012-13 power purchase cost of KPCL, towards dues of HESCOM to BESCOM on account of medium & short term power purchase cost.
8. Accordingly, it is proposed to adjust the excess subsidy release over 2012-13 Power Purchase Cost of HESCOM payable to KPCL for the year 2012-13 towards short term and medium term power purchase cost of HESCOM paid by BESCOM. The KPCL have to account this amount as though paid by BESCOM to KPCL instead of HESCOM to KPCL. Hence, this order.

**GOVT ORDER NO: EN 13 PSR 2013, BANGALORE, DATE:02-07-2013**

1. Government is pleased to accord approval to adjust the excess subsidy released to KPCL towards power purchase cost of HESCOM amounting to Rs. 524.52 crores over power purchase cost of HESCOM for

2012-13, towards short term & medium term and energy balancing power purchase dues of HESCOM to BESCOM as follows.

**Rs. in crores**

| Subsidy released to KPCL on behalf of HESCOM | KPCL power purchase demand of HESCOM for 2012-13 [Towards Principal portion only] | Excess release of subsidy to KPCL over power purchase demand of HESCOM | Amount adjusted to BESCOM |
|---|---|---|---|
| 1 | 2 | 3 | 4 |
| 1514.68 | 990.16 | -524.52 | +524.52 |

2. The adjustment of subsidy between HESCOM and BESCOM as approved in this order is only in respect of direct release of subsidy to KPCL on behalf of HESCOM. Accordingly, HESCOM, BESCOM and KPCL have to make necessary accounting entries in their books of accounts for 2012-13.
3. By this adjustment, BESCOMs payable to KPCL will be reduced by Rs. 524.52 crores and outstanding dues of HESCOM to KPCL will be increased.
4. There is no cash outflow in this Order.

By Order and in the name of the Governor of Karnataka,

**A.A. CHAPPARBAND**

Under Secretary to Government,

**P.R. 772** Energy Department.

## ಇಂಧನ ಸಚಿವಾಲಯ

**ವಿಷಯ:** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ: 31-05-2002.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ: 19-12-2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2013 ದಿನಾಂಕ: 20-04-2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 7 ಪಿಎಸ್‌ಆರ್ 2013 ದಿನಾಂಕ: 10-05-2013.

**ಪ್ರಸ್ತಾವನೆ :**

1) ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2) ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as you Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3) 2013-14ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801-80-101-1-13-106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ.500.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ರೂ.125.00 ಕೋಟಿಗಳನ್ನು ಮೇಲಿನ ಉಲ್ಲೇಖ (4)ರಲ್ಲಿ ಬಿಡುಗಡೆ ಮಾಡಲಾಗಿದೆ.

4) ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2013-14ನೇ ಸಾಲಿನ ಜುಲೈ ಮಾಹೆಗೆ ಲೆಕ್ಕಶೀರ್ಷಿಕೆ "2801-80-101-1-13-106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ.41.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 7 ಪಿಎಸ್ಆರ್ 2013, ಬೆಂಗಳೂರು, ದಿನಾಂಕ: 03-07-2013**

1) ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2013-14ನೇ ಸಾಲಿನ ಜುಲೈ ಮಾಹೆಗೆ ಲೆಕ್ಕಶೀರ್ಷಿಕೆ "2801-80-101-1-13-106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ.41.00 ಕೋಟಿ (ನಲವತ್ತೊಂದು ಕೋಟಿ ರೂ.ಗಳನ್ನು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.

4) ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 01 TFP 2013 ಬೆಂಗಳೂರು ದಿನಾಂಕ: 20-04-2013 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಎ.ಎ.ಚಪ್ಪರಬಂದ್,

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 773**

## ಇಂಧನ ಸಚಿವಾಲಯ

**ವಿಷಯ:** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್ಆರ್ 2004 ದಿನಾಂಕ: 15-03-2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್ಆರ್ 2008 ದಿನಾಂಕ: 04-09-2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 13 ಪಿಎಸ್ಆರ್ 2013 ದಿನಾಂಕ: 05-04-2013, 26-04-2013, 02-05-2013, 28-05-2013 ಮತ್ತು 21-06-2013.

**ಪ್ರಸ್ತಾವನೆ :**

1) ಮೇಲಿನ ಕ್ರಮಾಂಕ-1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2) ಮೇಲಿನ ಕ್ರಮಾಂಕ-2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತಿಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ:01-08-2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3) ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2013-14ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಲೆಕ್ಕಶೀರ್ಷಿಕೆ "2801-80-101-1-04-106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.5250.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ರೂ.1200.00ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಿದೆ.

4) ವಿದ್ಯುತ್ ಸರಬರಾಜು ಕಂಪನಿಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2013-14ನೇ ಸಾಲಿಗೆ ರೂ.5380.74 ಕೋಟಿಗಳಷ್ಟು ಸಹಾಯಧನವನ್ನು ಒದಗಿಸಲು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ ಆದೇಶಿಸಿದೆ.

5) 2013-14ನೇ ಸಾಲಿನ ಜುಲೈ ಮಾಹೆಗೆ ರೂ.200.00 ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 13 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ: 03–07–2013**

1) ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ರೂ.200.00 ಕೋಟಿಗಳ (ರೂ.ಇನ್ನೂರು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ) ಬಾಬ್ತು ಸಹಾಯಧನವನ್ನು ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

**(ರೂ.ಕೋಟಿಗಳಲ್ಲಿ)**

| **ವಿದ್ಯುತ್ ಸರಬರಾಜು ಕಂಪನಿಗಳು** | **10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ** | **ಭಾಗ್ಯ ಜ್ಯೋತಿ/ ಕುಟೀರ ಜ್ಯೋತಿ ಸ್ಥಾವರಗಳಿಗೆ** | **2013–14ರ ಜುಲೈ ಮಾಹೆಗೆ ಬಿಡುಗಡೆ** |
|---|---|---|---|
| ಬೆವಿಕಂ | 32.00 | 1.00 | **33.00** |
| ಮವಿಕಂ | 14.00 | 0.00 | **14.00** |
| ಹುವಿಕಂ | 74.00 | 2.00 | **76.00** |
| ಗುವಿಕಂ | 43.00 | 1.00 | **44.00** |
| ಚಾವಿಸನಿನಿ | 30.00 | 1.00 | **31.00** |
| ಹುಕ್ಕೇರಿ | 2.00 | 0.00 | **2.00** |
| **ಒಟ್ಟು** | **195.00** | **5.00** | **200.00** |

**(ರೂ.ಕೋಟಿಗಳಲ್ಲಿ)**

| **ವಿದ್ಯುತ್ ಸರಬರಾಜು ಕಂಪನಿಗಳು** | **ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ನೇರ ಬಿಡುಗಡೆ** | **ವಿದ್ಯುತ್ ಸರಬರಾಜು ಕಂಪನಿಗಳಿಗೆ ನೇರ ಬಿಡುಗಡೆ** | **ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡುಗಡೆ** (GUVNL) | **ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ನೇರ ಬಿಡುಗಡೆ** (JSWPTC) | **ಒಟ್ಟು ಮೊತ್ತ** |
|---|---|---|---|---|---|
| ಬೆವಿಕಂ | 33.00 | 0.00 | 0.00 | 0.00 | **33.00** |
| ಮವಿಕಂ | 9.00 | 0.00 | 0.00 | 5.00 | **14.00** |
| ಹುವಿಕಂ | 30.00 | 32.00 | 10.00 | 6.00 | **78.00** |
| ಗುವಿಕಂ | 25.00 | 19.00 | 0.00 | 0.00 | **44.00** |
| ಚಾವಿಸನಿನಿ | 20.00 | 11.00 | 0.00 | 0.00 | **31.00** |
| **ಒಟ್ಟು** | **117.00** | **62.00** | **10.00** | **11.00** | **200.00** |

* ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡುಗಡೆ ಮೊತ್ತವಾದ ರೂ 32.00 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ.2.00 ಕೋಟಿಗಳೆಂದು ಲೆಕ್ಕೀಕರಿಸುವುದು.

2) ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ.117.00 ಕೋಟಿಗಳು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ರೂ. 10.00 ಕೋಟಿಗಳು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 32.00 ಕೋಟಿಗಳು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ. 19.00 ಕೋಟಿಗಳು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ರೂ. 22.00 ಕೋಟಿಗಳನ್ನು ಬಿಡುಗಡೆ ಮಾಡಿದೆ.

3) ಮೇಲಿನ ಕೋಷ್ಟಕಗಳಲ್ಲಿರುವಂತೆ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿರುವ ರೂ.10.00 ಕೋಟಿಗಳ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL)ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚ ಭರಿಸಲು ಬಿಡುಗಡೆ ಮಾಡಿದೆ.

4) ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ.11.00 ಕೋಟಿಗಳನ್ನು ಜಿಂದಾಲ್ ಸ್ಟೀಲ್ ವರ್ಕ್ಸ್ ಪವರ್ ಟ್ರೇಡಿಂಗ್ ಕಂಪನಿ (JSWPTC)ದಿಂದ ಖರೀದಿಸಿರುವ ವಿದ್ಯುತ್ ಖರೀದಿಯ ಬಾಕಿಗೆ ಲೆಕ್ಕೀಕರಿಸುವುದು.

5) ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

6) ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

7) ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

8) 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

9) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 641 Exp-I 2013, ಬೆಂಗಳೂರು ದಿನಾಂಕ: 17-06-2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ.ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 774**

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಸಿ.ಜಿ. ರಾಥೋಡ್, ನಿವೃತ್ತ ಉಪ ಸಮನ್ವಯಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಿಂದಿನ ಸಹಾಯಕ ಶಿಕ್ಷಣಾಧಿಕಾರಿಗಳು, ವಿಜಾಪುರ ಜಿಲ್ಲೆ ಇವರು ಖಾಸಗಿ ಪ್ರಾಥಮಿಕ ಶಾಲೆಯಲ್ಲಿ ವಿಜಾಪುರ ಜಿಲ್ಲೆಯಲ್ಲಿ ಭಾಗಿಯಾದ ಅವ್ಯವಹಾರ/ಆರೋಪಗಳ ಮೇಲಿನ ಶಿಸ್ತು ಕ್ರಮದಲ್ಲಿನ ಅಂತಿಮ ಆದೇಶ

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ : ಇಡಿ 102 ಡಿಜಿಡಿ 1999 (ಭಾಗ–3), ದಿನಾಂಕ: 05/05/2004.
2) ಸರ್ಕಾರದ ಆದೇಶ ಸಂಖ್ಯೆ : ಇಡಿ 102 ಡಿಜಿಡಿ 1999, ದಿನಾಂಕ: 20/01/2005.
3) ಸರ್ಕಾರದ ಆದೇಶ ಸಂಖ್ಯೆ : ಇಡಿ 102 ಡಿಜಿಡಿ 1999, ದಿನಾಂಕ: 01/08/2006.
4) ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರ ವಿಚಾರಣಾ ವರದಿ ದಿನಾಂಕ: 13/08/2007
5) ಶ್ರೀ ಸಿ.ಜಿ. ರಾಥೋಡ್, ನಿವೃತ್ತ ಉಪ ಸಮನ್ವಯಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಿಂದಿನ ಸಹಾಯಕ ಶಿಕ್ಷಣಾಧಿಕಾರಿಗಳು, ವಿಜಾಪುರ ಜಿಲ್ಲೆ ಇವರ ಮನವಿ ಪತ್ರ ದಿನಾಂಕ: 02/05/2011, 28/07/2011 ಮತ್ತು 06/12/2012.
6) ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ಪತ್ರ ಸಂಖ್ಯೆ: ಜಿ12/ಖಾ.ಶಿ.ಅ.:ಶಿ.ಕ್ರ:57/ 2010–11/3398, ದಿನಾಂಕ: 24/11/2011.

**ಪ್ರಸ್ತಾವನೆ :**

1) ಬಿಜಾಪುರ ಜಿಲ್ಲೆಯ ಖಾಸಗಿ ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಣ ಸಂಸ್ಥೆಗಳಲ್ಲಿನ ಶಿಕ್ಷಕರ ನೇಮಕಾತಿಯಲ್ಲಿ ಅವ್ಯವಹಾರ ನಡೆದಿದೆ ಎನ್ನಲಾದ ಆರೋಪಕ್ಕೆ ಸಂಬಂಧಿಸಿದಂತೆ ಶಿಕ್ಷಣ ಇಲಾಖೆಯ 24 ಅಧಿಕಾರಿಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ: 05/05/2004ರ ಆದೇಶದಲ್ಲಿ ಶ್ರೀ ವೈ.ಆರ್. ಸಾಹುಕಾರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯೆಂದು ನೇಮಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ: 20/01/2005ರ ಆದೇಶದಲ್ಲಿ 24 ಅಧಿಕಾರಿಗಳ ಜಂಟಿ ಇಲಾಖಾ ವಿಚಾರಣೆಯನ್ನು ಮಾರ್ಪಡಿಸಿ, 24 ಪ್ರತ್ಯೇಕ ಪ್ರಕರಣಗಳೆಂದು ಆದೇಶಿಸಿದೆ. ಶ್ರೀ ವೈ.ಆರ್. ಸಾಹುಕಾರ್‌ರವರನ್ನು ಇಲಾಖಾ ವಿಚಾರಣೆ ನಡೆಸುವ ಅಧಿಕಾರಿಗಳ ಪಟ್ಟಿಯಿಂದ ತೆಗೆದುಹಾಕಿದ ಕಾರಣದಿಂದ ಮೇಲೆ (3)ರಲ್ಲಿ ಓದಲಾದ ದಿನಾಂಕ: 01/08/2006ರ ಆದೇಶದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್

ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿ ಎಂದು ನೇಮಿಸಲಾಗಿತ್ತು. ಸದರಿ ಆದೇಶದಲ್ಲಿ ಶ್ರೀ ಸಿ.ಜಿ. ರಾಥೋಡ್, ಉಪ ಸಮನ್ವಯಾಧಿಕಾರಿಗಳು, ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ , ಬಾಗಲಕೋಟೆ, ಇವರು ಈ ಹಿಂದೆ 1988 ರಿಂದ 1993ರ ಅವಧಿಯಲ್ಲಿ ವಿಜಾಪುರ ಗ್ರಾಮೀಣ ವಲಯದ ಸಾರ್ವಜನಿಕ ಶಿಕ್ಷಣ ಇಲಾಖೆ, ಬೀಳಗಿ ಇಲ್ಲಿ ಸಹಾಯಕ ಶಿಕ್ಷಣ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಆರ್ಥಿಕ ಮಿತವ್ಯಯದ ಸಂಬಂಧ ಆದೇಶ ಎಫ್.ಡಿ. 7 ಬಿಇಎಂ–87, ದಿನಾಂಕ: 10/10/1987 ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರ ಆದೇಶ ದಿನಾಂಕ: 28/11/1987ರ ಅನುಸಾರ ಯಾವುದೇ ಹೊಸ ಹುದ್ದೆ ತುಂಬಲು ನಿಷೇಧವಿದ್ದು, ಈ ಅದೇಶಗಳನ್ನು ಪಾಲಿಸದೇ ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿ ಬರುವ ಖಾಸಗಿ ಪ್ರಾಥಮಿಕ ಶಾಲೆಗಳ ಒಟ್ಟು 6 ಶಿಕ್ಷಕರ ನೇಮಕಾತಿ ಮಾಡಿ ಆಯುಕ್ತರ ಅನುಮತಿ ಇಲ್ಲದೆ ನೇಮಕವಾದ ಶಿಕ್ಷಕರಿಗೆ ಸರ್ಕಾರದ ಮಿತವ್ಯಯ ನೀತಿಗೆ ವ್ಯತಿರಿಕ್ತವಾಗಿ ವೇತನ ಬಿಡುಗಡೆ ಮಾಡಿದ ಆರೋಪ ಹೊಂದಿರುತ್ತಾರೆ. ಈ ಬಗ್ಗೆ ಆರೋಪಣಾ ಪಟ್ಟಿ ಜಾರಿಯಾದ ಮೇಲೆ ಆರೋಪಿತ ಅಧಿಕಾರಿಯು ಆರೋಪಗಳನ್ನು ಅಲ್ಲೆಗಳೆದು ಸಮಜಾಯಿಸಿ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ದಿನಾಂಕ: 01–08–2006ರ ಆದೇಶದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶಕರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯೆಂದು ನೇಮಿಸಲಾಗಿತ್ತು. ನಂತರ ದಿನಾಂಕ: 13–08–2007ರ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಆರೋಪಿತ ಅಧಿಕಾರಿಯ ಮೇಲೆ ಮಾಡಿರುವ ಆರೋಪಗಳು ರುಜುವಾತು ಆಗಿರುವುದಿಲ್ಲ ಮತ್ತು ಎರಡನೇಯದಾಗಿ ಆರೋಪಿತ ಅಧಿಕಾರಿಯ ಮೇಲೆ ಮಾಡಿರುವ ದೋಷಾರೋಪಣಾ ಪಟ್ಟಿಯು ತೀವ್ರ ಕಾಲವಿಳಂಬದಿಂದ ಸಲ್ಲಿಸಿರುವುದರಿಂದ ದೋಷರೋಪ ಪಟ್ಟಿಯು ಊರ್ಜಿತವಾಗಿರುವುದಿಲ್ಲ ಮತ್ತು ಆರೋಪಿತ ಅಧಿಕಾರಿಯು ನಿರ್ದೋಷಿ ಎಂದು ನಿರ್ಧರಿಸಿದ್ದೇನೆ ಎಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

2) ಮೇಲೆ (5)ರಲ್ಲಿ ಓದಲಾದ ದಿನಾಂಕ: 02/05/2011, 28/07/2011 ಮತ್ತು 06/12/2012ರಲ್ಲಿ ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ ಇಲಾಖೆಯ ವಿಚಾರಣಾಧಿಕಾರಿಗಳ ವರದಿಯಲ್ಲಿ ದೋಷಮುಕ್ತನಾಗಿದ್ದು ಹಾಗೂ ಈ ಕುರಿತು ಬಿಜಾಪುರದಲ್ಲಿ ಗೋಲ್‌ಗುಂಬಸ್ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 104/2004, ದಿನಾಂಕ: 05/09/2011ರಂದು 14 ಅಧಿಕಾರಿಗಳ ಮೇಲೆ ಮೊಕದ್ದಮೆ ದಾಖಲಾಗಿದ್ದು, ಅದರಲ್ಲಿ ತಾನು ಇರುವುದಿಲ್ಲ ಹಾಗೂ ಸಾಕ್ಷಿ ಪುರಾವೆಗಳು ಆಗದೇ ಇರುವುದರಿಂದ ದೋಷಾರೋಪಣೆ ಪತ್ರದಿಂದ ಕೈಬಿಡಲಾಗಿದೆ ಎಂಬ ಪ್ರತ್ಯೇಕ ಪುರವಣಿಯಲ್ಲಿ 18 ಜನರ ಹೆಸರಿನಲ್ಲಿ ಕ್ರಮ ಸಂಖ್ಯೆ : 1ರಲ್ಲಿ ತನ್ನ ಹೆಸರು ಇರುತ್ತದೆ ಎಂದು, ಈ ಕಾರಣದಿಂದ ತಾನು ಎಲ್ಲಾ ಇಲಾಖಾ ವಿಚಾರಣೆ, ದೋಷಾರೋಪಣಾ ಪತ್ರದಿಂದ ಕೈಬಿಟ್ಟಿರುವುದರಿಂದ, ಆರೋಪ ಮುಕ್ತನಾಗಿರುವುದರಿಂದ ನಿವೃತ್ತಿ ಸಮಯದಲ್ಲಿ ತಡೆಹಿಡಿಯಲಾದ ಎಲ್ಲಾ ಹಣಕಾಸು ಸೌಲಭ್ಯಗಳನ್ನು ಬಿಡುಗಡೆ ಮಾಡಬೇಕೆಂದು ವಿನಂತಿಸಿಕೊಂಡಿರುತ್ತಾರೆ.

3) ಮೇಲೆ (6)ರಲ್ಲಿ ಓದಲಾದ ದಿನಾಂಕ: 24/11/2011ರ ಪತ್ರದಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರು ಈ ಪ್ರಕರಣದ ಶಿಸ್ತು ಪ್ರಕರಣದ ಕುರಿತು ವಿಜಾಪುರದಲ್ಲಿ ಗೋಲ್‌ಗುಂಬಸ್ ಪೋಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 104/2004, ದಿನಾಂಕ: 05/09/2011ರಂದು 14 ಅಧಿಕಾರಿಗಳ ಮೇಲೆ ಮೊಕದ್ದಮೆ ದಾಖಲಾಗಿದ್ದು, ಇದರಲ್ಲಿ ಆರೋಪಿತ ಅಧಿಕಾರಿಯ ಹೆಸರು ಇರುವುದಿಲ್ಲ ಹಾಗೂ ಸಾಕ್ಷಿ ಪುರಾವೆಗಳು ಆಗದೇ ಇರುವುದರಿಂದ ದೋಷಾರೋಪಣಾ ಪಟ್ಟಿಯಿಂದ ಕೈಬಿಡಲಾಗಿದೆ ಎಂಬ ಪ್ರತ್ತೇಕ ಪುರವಣಿಯಲ್ಲಿ 18 ಜನರ ಹೆಸರಿನಲ್ಲಿ ಕ್ರಮಸಂಖ್ಯೆ: 1 ರಲ್ಲಿ ಅಧಿಕಾರಿಯ ಹೆಸರು ಇದ್ದು, ಬಿಜಾಪುರದ 3ನೇ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ದಾಖಲಾಗಿರುವ ಸಿಸಿ ಸಂಖ್ಯೆ : 1907/2011ರ ದಿನಾಂಕ: 15/09/2011ರ ಆದೇಶದಂತೆ, ಅಗತ್ಯ ಕ್ರಮಕ್ಕಾಗಿ ವರದಿ ಸಲ್ಲಿಸಿದ್ದಾರೆ. ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 43 ಡಿಜಿಪಿ 2011, ಬೆಂಗಳೂರು, ದಿನಾಂಕ : 25ನೇ ಜೂನ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯಲ್ಲಿ ವಿಚಾರಣಾಧಿಕಾರಿಗಳು "ಆರೋಪಿತ ಅಧಿಕಾರಿಯ ಮೇಲೆ ಮಾಡಿರುವ ದೋಷಾರೋಪಣಾ ಪಟ್ಟಿಯು ವಿಳಂಬದಿಂದ ಸಲ್ಲಿಸಿರುವುದರಿಂದ, ದೋಷಾರೋಪಣಾ ಪಟ್ಟಿಯು ಊರ್ಜಿತವಾಗಿರುವುದಿಲ್ಲ ಎಂದೂ ಮತ್ತು ಆರೋಪಿತ ಅಧಿಕಾರಿಯು ಮೇಲೆ ಮಾಡಿರುವ ಅರೋಪಗಳ ಬಗ್ಗೆ ಆರೋಪಿತ ಅಧಿಕಾರಿಯು ನಿರ್ದೋಷಿಯೆಂದು ತಿಳಿಸಿರುವುದರಿಂದ" ಮತ್ತು ಬಿಜಾಪುರದ 3ನೇ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ದಾಖಲಾಗಿರುವ ಸಿಸಿ ಸಂಖ್ಯೆ : 1907/2011ರ ಪ್ರಕರಣದಲ್ಲಿ ಬರಬಹುದಾದ ಅಂತಿಮ ತೀರ್ಪಿನ ಷರತ್ತಿಗೆ ಒಳಪಟ್ಟು, ಶ್ರೀ ಸಿ.ಜಿ. ರಾಥೋಡ್, ನಿವೃತ್ತ ಉಪ ಸಮನ್ವಯಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಿಂದಿನ ಸಹಾಯಕ ಶಿಕ್ಷಣಾಧಿಕಾರಿಗಳು, ವಿಜಾಪುರ ಜಿಲ್ಲೆ, ಇವರನ್ನು ದಿನಾಂಕ: 20–01–2005, ಸಂಖ್ಯೆ: ಇಡಿ 102 ಡಿಜಿಡಿ 99ರ ಸರ್ಕಾರಿ ಆದೇಶದಲ್ಲಿ ನಮೂದಿಸಿರುವ ಆಪಾದನೆಗಳಿಂದ ದೋಷಮುಕ್ತರನ್ನಾಗಿಸಿ, ಆದೇಶಿಸಿಲಾಗಿದೆ ಮತ್ತು ಈ ವಿಚಾರಣೆ ನಡೆಯದಿದ್ದಲ್ಲಿ, ಆರೋಪಿತ ಅಧಿಕಾರಿಯಾದ ಶ್ರೀ ಸಿ.ಜಿ. ರಾಥೋಡ್, ನಿವೃತ್ತ ಉಪ ಸಮನ್ವಯಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಿಂದಿನ ಸಹಾಯಕ ಶಿಕ್ಷಣಾಧಿಕಾರಿಗಳು, ವಿಜಾಪುರ ಜಿಲ್ಲೆ, ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶ್ರೀಪಾದು. ಹೆಚ್. ಎನ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸಮಿತಿಗಳು)

**ಪಿ.ಆರ್. 800**

**SC 50**

## ಒಳಾಡಳಿತ ಸಚಿವಾಲಯ

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ದಿನಾಂಕ:31.03.2013ಕ್ಕೆ ಅವಧಿ ಪೂರ್ಣಗೊಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:31.03.2014ರವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಲಾ 54 ಪಿಪಿಇ 2004, ದಿನಾಂಕ:27.07.2005,
2) ಸರ್ಕಾರದ ಆದೇಶ ಸಂಖ್ಯೆ:ಒಇ 55 ಪಿಪಿಇ 2012, ದಿನಾಂಕ:14.03.2012,
3) ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ:ಒಇ 55 ಪಿಪಿಇ 2012, ದಿನಾಂಕ:14.03.2012,
4) ಸರ್ಕಾರದ ಆದೇಶ ಸಂಖ್ಯೆ:ಒಇ 314 ಪಿಪಿಇ 2011, ದಿನಾಂಕ:03.05.2012,
5) ಸರ್ಕಾರದ ಆದೇಶ ಸಂಖ್ಯೆ:ಒಇ 107 ಪಿಪಿಇ 2012, ದಿನಾಂಕ:18.05.2012,
6) ಸರ್ಕಾರದ ಆದೇಶ ಸಂಖ್ಯೆ:ಒಇ 269 ಪಿಪಿಇ 2011, ದಿನಾಂಕ:26.05.2012,
7) ಸರ್ಕಾರದ ಆದೇಶ ಸಂಖ್ಯೆ:ಒಇ 297 ಪಿಪಿಇ 2011, ದಿನಾಂಕ:02.06.2012,
8) ಸರ್ಕಾರದ ಆದೇಶ ಸಂಖ್ಯೆ:ಒಇ 533 ಪಿಪಿಇ 2011, ದಿನಾಂಕ:27.06.2012,
9) ಸರ್ಕಾರದ ಆದೇಶ ಸಂಖ್ಯೆ:ಒಇ 164 ಪಿಪಿಇ 2012, ದಿನಾಂಕ:24.07.2012,
10) ಸರ್ಕಾರದ ಆದೇಶ ಸಂಖ್ಯೆ:ಒಇ 265 ಪಿಪಿಇ 2012, ದಿನಾಂಕ:27.08.2012,
11) ಸರ್ಕಾರದ ಆದೇಶ ಸಂಖ್ಯೆ:ಒಇ 421 ಪಿಪಿಇ 2012, ದಿನಾಂಕ:20.12.2012,
12) ಸರ್ಕಾರದ ಆದೇಶ ಸಂಖ್ಯೆ:ಒಇ 293 ಪಿಪಿಇ 2011, ದಿನಾಂಕ:27.12.2012,
13) ಸರ್ಕಾರದ ಆದೇಶ ಸಂಖ್ಯೆ:ಲಾ 112 ಎಲ್‌ಸಿಇ 2012, ದಿನಾಂಕ:28.12.2012
14) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ:ಡಿಪಿಎನ್/ಸಿಶಾ–1/268/2012–13, ದಿನಾಂಕ:18.02.2013
15) ಸರ್ಕಾರದ ಆದೇಶ ಸಂಖ್ಯೆ:ಒಇ 284 ಪಿಪಿಇ 2012, ದಿನಾಂಕ:04.04.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ: 1ರಲ್ಲಿ ಓದಲಾದ ಸರ್ಕಾರಿ ಆದೇಶ ಪ್ರಕಾರ 3ನೇ ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿಯ ಒಂದು ದಲಾಯತರ ಹುದ್ದೆಯನ್ನು ಕೂಡಲೇ ಜಾರಿಗೆ ಬರುವಂತೆ ಬಾಗಲಕೋಟೆಯ ಸರ್ಕಾರಿ ಅಭಿಯೋಜಕರ ಕಛೇರಿಗೆ ಸ್ಥಳಾಂತರಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 2 ಮತ್ತು ಕ್ರಮ ಸಂಖ್ಯೆ:3ರಲ್ಲಿನ ತಿದ್ದುಪಡಿ ಆದೇಶದನ್ವಯ ರಾಜ್ಯದಲ್ಲಿನ 62 ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ 62 ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಮತ್ತು ಅವರ ಕಛೇರಿಗಳಿಗೆ ಹೊಂದಿಕೊಂಡಂತೆ 62 ಶೀಘ್ರಲಿಪಿಗಾರರ ಹುದ್ದೆಗಳನ್ನು, ಮೇಲೆ ಓದಲಾದ ಕ್ರಮ ಸಂಖ್ಯೆ: 6ರಲ್ಲಿನ ಸರ್ಕಾರಿ ಆದೇಶದನ್ವಯ ಬೆಂಗಳೂರು ನಗರದ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರ ಕಛೇರಿಗೆ ಹೊಂದಿಕೊಂಡಂತೆ ಒಂದು ಆಡಳಿತಾಧಿಕಾರಿಯ ಹುದ್ದೆಯನ್ನು ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ: 8ರಲ್ಲಿನ ಸರ್ಕಾರಿ ಆದೇಶದನ್ವಯ ಬೆಂಗಳೂರು ನಗರದಲ್ಲಿ ಸ್ಥಾಪಿತವಾಗಿರುವ ಮಕ್ಕಳ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಸರ್ಕಾರಿ ಅಭಿಯೋಜಕರ, ಒಂದು ಶೀಘ್ರಲಿಪಿಗಾರರ ಮತ್ತು ಒಂದು ದಲಾಯತರ ಹುದ್ದೆಯನ್ನು ಸಂಬಂಧಪಟ್ಟ ನ್ಯಾಯಾಲಯಗಳು / ಕಛೇರಿಗಳು ಅಸ್ತಿತ್ವದಲ್ಲಿ ಇರುವವರೆಗೆ ಅಥವಾ ಒಂದು ವರ್ಷದ ಅವಧಿಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮೊದಲ ಬಾರಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

ಮುಂದುವರೆದು, ಮೇಲೆ ಓದಲಾದ ಕ್ರಮ ಸಂಖ್ಯೆ:15ರಲ್ಲಿನ ಸರ್ಕಾರದ ತಿದ್ದುಪಡಿ ಆದೇಶದನ್ವಯ 2ನೇ ಹೆಚ್ಚುವರಿ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಚಿತ್ರದುರ್ಗ ಎಂದಿದ್ದನ್ನು 1ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿತ್ರದುರ್ಗ ಎಂದೂ ಮತ್ತು 3ನೇ ಹೆಚ್ಚುವರಿ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಿಜಾಪುರ ಎಂದಿದ್ದನ್ನು 1ನೇ ಹೆಚ್ಚುವರಿ ಸಿವಿಲ್ ಜಡ್ಜ್(ಕಿವಿ) ಮತ್ತು 1ನೇ ಜೆಎಂಎಫ್‌ಸಿ ನ್ಯಾಯಾಲಯ, ಬಿಜಾಪುರ ಎಂದೂ ಆಡಳಿತಾತ್ಮಕ ಕಾರಣಗಳಿಂದಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ: 2ರಲ್ಲಿನ ಸರ್ಕಾರಿ ಆದೇಶಕ್ಕೆ ತಿದ್ದುಪಡಿ ಮಾಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 4, 7 ಮತ್ತು 12ರಲ್ಲಿನ ಸರ್ಕಾರಿ ಆದೇಶಗಳನ್ವಯ, ಕ್ರಮವಾಗಿ 61 ಶೀಘ್ರಲಿಪಿಗಾರರ, 09 ದ್ವಿತೀಯ ದರ್ಜೆ ಸಹಾಯಕರ ಮತ್ತು 03 ಅಭಿಯೋಗ ಉಪನಿರ್ದೇಶಕರ(ಈ ಹಿಂದೆ ಜಂಟಿ ಅಭಿಯೋಗ ನಿರ್ದೇಶಕರು) ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 5ರಲ್ಲಿನ ಸರ್ಕಾರಿ ಆದೇಶದನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 17 ತಾತ್ಕಾಲಿಕ ಹುದ್ದೆಗಳನ್ನು, ಮೇಲೆ ಕ್ರಮ ಸಂಖ್ಯೆ: 9ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ 863 ತಾತ್ಕಾಲಿಕ ಹುದ್ದೆಗಳನ್ನು ಹಾಗೂ ಮೇಲೆ ಕ್ರಮ ಸಂಖ್ಯೆ:11ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ 63 ಸರ್ಕಾರಿ ಅಭಿಯೋಜಕರ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:01.04.2012 ರಿಂದ ಅಥವಾ ಸದರಿ ಹುದ್ದೆಗಳ ಅವಧಿ ಪೂರ್ಣಗೊಂಡ ದಿನಾಂಕದಿಂದ ಏಕರೂಪವಾಗಿ ದಿನಾಂಕ:31.03.2013ರವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯ / ಕಛೇರಿಗಳು ಅಸ್ತಿತ್ವದಲ್ಲಿರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 10ರಲ್ಲಿನ ಸರ್ಕಾರಿ ಆದೇಶದನ್ವಯ ಸವದತ್ತಿಯ ಹೆಚ್ಚುವರಿ ಸಿ.ಜೆ.(ಹಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಲಯಕ್ಕೆ ಹೊಂದಿಕೊಂಡಂತೆ ಸೃಜನೆಯಾಗಿದ್ದ ಒಂದು ಸಹಾಯಕ ಸರ್ಕಾರಿ ವಕೀಲರ ಹುದ್ದೆಯನ್ನು ಹಾಗೂ ಅವರ ಕಛೇರಿಯ ಒಂದು ಬೆರಳಚ್ಚುಗಾರರ ಮತ್ತು ಒಂದು ದಲಾಯತರ ಹುದ್ದೆಯನ್ನು ಬೆಳಗಾಂ ಜಿಲ್ಲೆಯ ಅಥಣಿ ತಾಲ್ಲೂಕು ಕೇಂದ್ರದಲ್ಲಿನ ನ್ಯಾಯಾಲಯಕ್ಕೆ ಸ್ಥಳಾಂತರಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 13ರಲ್ಲಿನ ಸರ್ಕಾರಿ ಆದೇಶದನ್ವಯ ರಾಜ್ಯದಲ್ಲಿನ 93 ತ್ವರಿತ ವಿಲೇವಾರಿ ನ್ಯಾಯಾಲಯಗಳಲ್ಲಿ 54 ನ್ಯಾಯಾಲಯಗಳನ್ನು ರದ್ದುಗೊಳಿಸಿ, 39 ತ್ವರಿತಗತಿ ನ್ಯಾಯಾಲಯಗಳನ್ನು ಮಾತ್ರ ಮುಂದುವರೆಸಲು ಕ್ರಮವಹಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 14ರಲ್ಲಿನ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: 1 ರಿಂದ 13ರಲ್ಲಿನ ಆದೇಶಗಳನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಮುಂದುವರೆದಿರುವ ಈ ಕೆಳಕಂಡ ವೃಂದದ ತಾತ್ಕಲಿಕ ಹುದ್ದೆಗಳನ್ನು ದಿನಾಂಕ:01.04.2013 ರಿಂದ ಅಥವಾ ಅವುಗಳ ಅವಧಿ ಪೂರ್ಣಗೊಂಡ ದಿನಾಂಕದಿಂದ ಏಕರೂಪವಾಗಿ ದಿನಾಂಕ:31.03.2015ರವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು / ಕಛೇರಿಗಳು ಅಸ್ತಿತ್ವದಲ್ಲಿರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

| ಕ್ರ.ಸಂ: | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾನೂನು ಅಧಿಕಾರಿ(ಹಿರಿಯ) | 2 |
| 2 | ಸರ್ಕಾರಿ ಅಭಿಯೋಜಕರು } 81<br>ಶೀಘ್ರ ವಿಲೇವಾರಿ ನ್ಯಾಯಾಲಯಗಳ ಸರ್ಕಾರಿ ಅಭಿಯೋಜಕರ ಹುದ್ದೆಗಳು } 39 | 121 |
| 3 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 36 |
| 4 | ಕಾನೂನು ಅಧಿಕಾರಿ (ಕಿರಿಯ) | 35 |
| 5 | ಸಹಾಯಕ ಸರ್ಕಾರಿ ಅಭಿಯೋಜಕರು | 235 |
| 6 | ಲೆಕ್ಕ ಪರಿಶೋಧನಾಧಿಕಾರಿಗಳು | 01 |
| 7 | ಆಡಳಿತಾಧಿಕಾರಿ | 01 |
| 8 | ಅಧೀಕ್ಷಕರು | 24 |
| 9 | ಶೀಘ್ರಲಿಪಿಗಾರರು | 108 |
| 10 | ಪ್ರಥಮ ದರ್ಜೆ ಸಹಾಯಕರು | 13 |
| 11 | ಸಹಾಯಕ ಗ್ರಂಥಪಾಲಕರು | 1 |
| 12 | ದ್ವಿತೀಯ ದರ್ಜೆ ಸಹಾಯಕರು | 16 |
| 13 | ಬೆರಳಚ್ಚುಗಾರರು | 180 |
| 14 | ವಾಹನ ಚಾಲಕರು | 2 |
| 15 | ಅಟೆಂಡರ್ | 43 |
| 16 | ದಲಾಯತ್ | 119 |
| 17 | ಗ್ರೂಪ್–ಡಿ | 10 |
| 18 | ಜಾಡಮಾಲಿ | 1 |

ಪ್ರಸ್ತಾವನೆಯಲ್ಲಿ ಮುಂದುವರೆಸುವಂತೆ ಪ್ರಸ್ತಾಪಿಸಲಾಗಿದ್ದ 2ನೇ ಮತ್ತು 3ನೇ ಎಸಿಎಂಎಂ ನ್ಯಾಯಾಲಯಗಳ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳ ಬಗ್ಗೆ ಈ ಹಿಂದಿನ ಸಾಲಿನ ಆದೇಶದಲ್ಲಿ ಈಗಾಗಲೇ ತಿಳಿಸಿರುವಂತೆ 7ನೇ ಮತ್ತು 8ನೇ ಎಸಿಎಂಎಂ ನ್ಯಾಯಾಲಯದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳೆಂದು ಮುಂದುವರೆಸಿದೆ. ಬೆಂಗಳೂರು ನಗರದ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯದ ಶೀಘ್ರಲಿಪಿಗಾರರ ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ:4ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಖಾಯಂ ಹುದ್ದೆಯೆಂದು ಘೋಷಿಸಿದೆ. ತುಮಕೂರಿನ 3ನೇ ಹೆಚ್ಚುವರಿ ಸರ್ಕಾರಿ ಅಭಿಯೋಜಕರ ಕಛೇರಿಯ ಅಧೀಕ್ಷಕರ ಹುದ್ದೆಯು ಖಾಯಂ ಹುದ್ದೆಯಾಗಿರುತ್ತದೆ. ಆದ್ದರಿಂದ, ಸದರಿ 04 ಹುದ್ದೆಗಳನ್ನು ಕೈಬಿಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 120 ಪಿಪಿಇ 2013,ಬೆಂಗಳೂರು, ದಿನಾಂಕ: 18ನೇ ಜುಲೈ 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶದ ಅನುಬಂಧದ ಅಂಕಣ (2)ರಲ್ಲಿನ ವಿವಿಧ ವೃಂದದ ಅಂಕಣ (3)ರಲ್ಲಿನ ಸಂಖ್ಯೆಯ ಅಂಕಣ (4)ರಲ್ಲಿನ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ವಿವಿಧ ಕಛೇರಿಗಳಲ್ಲಿನ ವಿವಿಧ ವೃಂದದ ಈ ಕೆಳಕಂಡ ಒಟ್ಟಾರೆ 945 ತಾತ್ಕಾಲಿಕ ಹುದ್ದೆಗಳನ್ನು ಏಕರೂಪವಾಗಿ ದಿನಾಂಕ:01.04.2013 ರಿಂದ ಅಥವಾ ಅವಧಿ ಪೂರ್ಣಗೊಂಡ ದಿನಾಂಕದಿಂದ ದಿನಾಂಕ:31.03.2014ರ ವರೆಗೆ ಅಥವಾ ಸಂಬಂಧಪಟ್ಟ ಹುದ್ದೆಗಳ ನ್ಯಾಯಾಲಯಗಳು / ಕಛೇರಿಗಳು ಅಸ್ತಿತ್ವದಲ್ಲಿರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

| ಕ್ರ.ಸಂ: | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾನೂನು ಅಧಿಕಾರಿ(ಹಿರಿಯ) | 2 |
| 2 | ಸರ್ಕಾರಿ ಅಭಿಯೋಜಕರು 81<br>ಶೀಘ್ರ ವಿಲೇವಾರಿ ನ್ಯಾಯಾಲಯಗಳ ಸರ್ಕಾರಿ ಅಭಿಯೋಜಕರ ಹುದ್ದೆಗಳು 39 | 121 |
| 3 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 32 |
| 4 | ಕಾನೂನು ಅಧಿಕಾರಿ(ಕಿರಿಯ) | 38 |
| 5 | ಸಹಾಯಕ ಸರ್ಕಾರಿ ಅಭಿಯೋಜಕರು | 235 |
| 6 | ಲೆಕ್ಕ ಪರಿಶೋಧನಾಧಿಕಾರಿಗಳು | 01 |
| 7 | ಆಡಳಿತಾಧಿಕಾರಿ | 01 |
| 8 | ಅಧೀಕ್ಷಕರು | 23 |
| 9 | ಶೀಘ್ರಲಿಪಿಗಾರರು | 107 |
| 10 | ಪ್ರಥಮ ದರ್ಜೆ ಸಹಾಯಕರು | 13 |
| 11 | ಸಹಾಯಕ ಗ್ರಂಥಪಾಲಕರು | 01 |
| 12 | ದ್ವಿತೀಯ ದರ್ಜೆ ಸಹಾಯಕರು | 16 |
| 13 | ಬೆರಳಚ್ಚುಗಾರರು | 180 |
| 14 | ವಾಹನ ಚಾಲಕರು | 2 |
| 15 | ಅಟೆಂಡರ್ | 43 |
| 16 | ದಲಾಯತ್ | 119 |
| 17 | ಗ್ರೂಫ್–ಡಿ | 10 |
| 18 | ಜಾಡಮಾಲಿ | 1 |
| | **ಒಟ್ಟು** | **945** |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು 2014–ನ್ಯಾಯಪರಿಪಾಲನೆ 114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು –02– ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, 002–ಅಧಿಕಾರಿಗಳ ವೇತನ, 003–ಸಿಬ್ಬಂದಿ ವೇತನ ಈ ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಪ್ರಧಾನ/ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಆದೇಶ ಸಂ: ಆಇ 58 ಎಸ್‌ಆರ್‌ಎಸ್ 79, ದಿನಾಂಕ:07.09.1979ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು –ಬಿ)

ಸರ್ಕಾರದ ಆದೇಶ ಸಂಖ್ಯೆ:ಒಇ 120 ಪಿಪಿಇ 2013, ಬೆಂಗಳೂರು. ದಿನಾಂಕ: 18ನೇ ಜುಲೈ 2013.

ಅನುಬಂಧ

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 945 ತಾತ್ಕಾಲಿಕ ಹುದ್ದೆಗಳ ಕಾರ್ಯವಧಿಯನ್ನು ದಿನಾಂಕ:31.03.2014ರ ವರೆಗೆ ಮುಂದುವರೆಸಲು ಮಂಜೂರಾತಿ ನೀಡಿರುವ ಬಗ್ಗೆ ವಿವರ:

| ಕ್ರಮ ಸಂಖ್ಯೆ: | ಹುದ್ದೆ ಹೆಸರು | ಹುದ್ದೆಗಳ ಸಂಖ್ಯೆ | ಹುದ್ದೆಯು ಮಂಜೂರಾಗಿರುವ ಸ್ಥಳ / ಕಛೇರಿ | ಹುದ್ದೆಗಳನ್ನು ಮುಂದುವರೆಸಿದ ಹಿಂದಿನ ಆದೇಶದ ಸಂಖ್ಯೆ: | ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಲು ಅನುಮತಿ ನೀಡಿರುವ ಅವಧಿ | ಷರಾ |
|---|---|---|---|---|---|---|
| (01) | (02) | (03) | (04) | (05) | (06) | (07) |
| 1. | ಕಾನೂನು ಅಧಿಕಾರಿ(ಕಿರಿಯ) | 01 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಒಇ 164 ಪಿಪಿಇ 2012, ದಿನಾಂಕ:24.07.2012 | ದಿನಾಂಕ:31.03.2014ರ ವರೆಗೆ ಅಥವಾ ಸದರಿ ಹುದ್ದೆಗಳ ನ್ಯಾಯಾಲಯಗಳು/ ಕಛೇರಿಗಳು ಅಸ್ಥಿತ್ವದಲ್ಲಿರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸಿ ಆದೇಶ ಹೊರಡಿಸುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ | |
| | ಕಾನೂನು ಅಧಿಕಾರಿ(ಕಿರಿಯ) | 02 | –ಅದೇ– | –ಅದೇ– | –ಅದೇ– | |
| | ಅಧೀಕ್ಷಕರು | 01 | –ಅದೇ– | –ಅದೇ– | –ಅದೇ– | |
| | ಬೆರಳಚ್ಚುಗಾರರು | 02 | –ಅದೇ– | –ಅದೇ– | –ಅದೇ– | |
| | ಗ್ರೂಪ್ 'ಡಿ' | 05 | –ಅದೇ | –ಅದೇ– | –ಅದೇ– | |
| | ಸಹಾಯಕ ಗ್ರಂಥಪಾಲಕರು | 01 | –ಅದೇ– | –ಅದೇ– | –ಅದೇ– | |
| | ಜಾಡಮಾಲಿ | 01 | –ಅದೇ– | –ಅದೇ– | –ಅದೇ– | |
| | ಕಾನೂನು ಅಧಿಕಾರಿ(ಹಿರಿಯ) | 02 | –ಅದೇ– | –ಅದೇ– | –ಅದೇ– | |
| | ಪ್ರಥಮ ದರ್ಜೆ ಸಹಾಯಕರು | 02 | –ಅದೇ– | –ಅದೇ– | –ಅದೇ– | |
| | ದ್ವಿತೀಯ ದರ್ಜೆ ಸಹಾಯಕರು | 02 | –ಅದೇ– | –ಅದೇ– | –ಅದೇ– | |
| | ಬೆರಳಚ್ಚುಗಾರರು | 04 | –ಅದೇ– | –ಅದೇ– | –ಅದೇ– | |
| | ದಲಾಯತ್ | 03 | –ಅದೇ– | –ಅದೇ– | –ಅದೇ– | |
| | ಲೆಕ್ಕ ಪರಿಶೋಧನಾಧಿಕಾರಿ (ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಒಇ 81 ಪಿಪಿಇ 2010, ದಿನಾಂಕ: 26.11.2010ರ ಪ್ರಕಾರ) | 01 | –ಅದೇ– | –ಅದೇ– | –ಅದೇ– | |
| | | **27** | | | | |

| ಕ್ರಮ ಸಂಖ್ಯೆ: | ಹುದ್ದೆ ಹೆಸರು | ಹುದ್ದೆಗಳ ಸಂಖ್ಯೆ | ಹುದ್ದೆಯು ಮಂಜೂರಾಗಿರುವ ಸ್ಥಳ / ಕಛೇರಿ | ಹುದ್ದೆಗಳನ್ನು ಮುಂದುವರೆಸಿದ ಹಿಂದಿನ ಆದೇಶದ ಸಂಖ್ಯೆ: | ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಲು ಅನುಮತಿ ನೀಡಿರುವ ಅವಧಿ | ಷರಾ |
|---|---|---|---|---|---|---|
| ಬೆಂಗಳೂರುನಗರ ವಿಭಾಗ<br>ಬೆಂಗಳೂರು ನಗರ ಜಿಲ್ಲೆ | | | | | | |
| | | **27** | | | | |
| **2** | ಅಟೆಂಡರ್ | 01 | ಕಾನೂನು ಅಧಿಕಾರಿ(ಹಿರಿಯ) ಕಛೇರಿ, ಬೆಂಗಳೂರು ನಗರ | ಒಇ 164 ಪಿಪಿಇ 2012, ದಿನಾಂಕ:24.07.2012 | ದಿನಾಂಕ:31.03.2014ರ ವರೆಗೆ ಅಥವಾ ಸದರಿ ಹುದ್ದೆಗಳ ನ್ಯಾಯಾಲಯಗಳು/ ಕಛೇರಿಗಳು ಅಸ್ತಿತ್ವದಲ್ಲಿರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸಿ ಆದೇಶ ಹೊರಡಿಸುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ | |
| | ಕಾನೂನು ಅಧಿಕಾರಿ(ಕಿರಿಯ) | 01 | ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ನಗರ | –ಅದೇ– | –ಅದೇ– | |
| | ದಲಾಯತ್ | 01 | ಕಾನೂನು ಅಧಿಕಾರಿ(ಕಿರಿಯ) ಕಛೇರಿ, ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ನಗರ | –ಅದೇ– | –ಅದೇ– | |
| | ಸರ್ಕಾರಿ ಅಭಿಯೋಜಕರು | 03 | ಬೆಂಗಳೂರು ನಗರ | –ಅದೇ– | –ಅದೇ– | |
| | ಆಡಳಿತಾಧಿಕಾರಿ | 01 | ಸರ್ಕಾರಿ ಅಭಿಯೋಜಕರ ಕಛೇರಿ, ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | ಒಇ 269 ಪಿಪಿಇ 2011, ದಿನಾಂಕ:26.05.2012. | –ಅದೇ– | |
| | ಅಧೀಕ್ಷಕರು | 01 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಮೆಟ್ರೋಪಾಲಿಟನ್ ನಗರ | ಒಇ 164 ಪಿಪಿಇ 2012, ದಿನಾಂಕ:24.07.2012 | –ಅದೇ– | |
| | ಬೆರಳಚ್ಚುಗಾರರು | 02 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಮೆಟ್ರೋಪಾಲಿಟನ್ ನಗರ | –ಅದೇ– | –ಅದೇ– | |
| | ಅಟೆಂಡರ್ | 01 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಮೆಟ್ರೋಪಾಲಿಟನ್ ನಗರ | –ಅದೇ– | –ಅದೇ– | |
| | ಗ್ರೂಫ್ 'ಡಿ' | 01 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಮೆಟ್ರೋಪಾಲಿಟನ್ ನಗರ | –ಅದೇ– | –ಅದೇ– | |
| | | **39** | | | | |

| ಕ್ರಮ ಸಂಖ್ಯೆ: | ಹುದ್ದೆ ಹೆಸರು | ಹುದ್ದೆಗಳ ಸಂಖ್ಯೆ | ಹುದ್ದೆಯು ಮಂಜೂರಾಗಿರುವ ಸ್ಥಳ / ಕಛೇರಿ | ಹುದ್ದೆಗಳನ್ನು ಮುಂದುವರೆಸಿದ ಹಿಂದಿನ ಆದೇಶದ ಸಂಖ್ಯೆ: | ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಲು ಅನುಮತಿ ನೀಡಿರುವ ಅವಧಿ | ಷರಾ |
|---|---|---|---|---|---|---|
| | | **39** | | | | |
| | ಸರ್ಕಾರಿ ಅಭಿಯೋಜಕರು | 01 | 37ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | ಒಇ 164 ಪಿಪಿಇ 2012, ದಿನಾಂಕ:24.07.2012 | ದಿನಾಂಕ:31.03.2014ರ ವರೆಗೆ ಅಥವಾ ಸದರಿ ಹುದ್ದೆಗಳ ನ್ಯಾಯಾಲಯಗಳು/ ಕಛೇರಿಗಳು ಅಸ್ಥಿತ್ವದಲ್ಲಿರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸಿ ಆದೇಶ ಹೊರಡಿಸುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ | |
| | ಸರ್ಕಾರಿ ಅಭಿಯೋಜಕರು | 01 | 38ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– | |
| | ಸರ್ಕಾರಿ ಅಭಿಯೋಜಕರು | 01 | 39ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– | |
| | ಸರ್ಕಾರಿ ಅಭಿಯೋಜಕರು | 01 | 40ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– | |
| | ಸರ್ಕಾರಿ ಅಭಿಯೋಜಕರು | 01 | 41ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– | |
| | ಸರ್ಕಾರಿ ಅಭಿಯೋಜಕರು | 01 | 42ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– | |
| | ಸರ್ಕಾರಿ ಅಭಿಯೋಜಕರು | 01 | 43ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– | |
| | ಸರ್ಕಾರಿ ಅಭಿಯೋಜಕರು | 01 | 44ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– | |
| | ಸರ್ಕಾರಿ ಅಭಿಯೋಜಕರು | 01 | 1ನೇ ತ್ವರಿತ ಗತಿ ನ್ಯಾಯಾಲಯ, ಬೆಂಗಳೂರು ನಗರ | ಒಇ 421 ಪಿಪಿಇ 2012, ದಿನಾಂಕ:24.07.2012 | –ಅದೇ– | |
| | ಸರ್ಕಾರಿ ಅಭಿಯೋಜಕರು | 01 | 2ನೇ ತ್ವರಿತ ಗತಿ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– | |
| | | **49** | | | | |

